# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 898 |
| ಮಾನ್ಯ ಸದ್ಯಸರ ಹೆಸರು: | ಶ್ರೀ ರಘುನಾಥ್ ರಾವ್ ಮಲ್ಕಾಪುರೆ<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದವರು: | ಅಬಕಾರಿ ಸಚಿವರು |
| ಉತ್ತರಿಸಬೇಕಾದ ದಿನಾಂಕ: | 12–03–2020 |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯಲ್ಲಿ ಎಲ್ಲಾ ತಾಲ್ಲೂಕಿನಲ್ಲಿ ಕಾನೂನು ಬಾಹಿರವಾಗಿ ಪರವಾನಗಿ ಇಲ್ಲದೆ ಗ್ರಾಮೀಣ ಪ್ರದೇಶದಲ್ಲಿ ಚಿಲ್ಲರೆ ಮದ್ಯ ಮಾರಾಟ ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಬೀದರ್ ಜಿಲ್ಲೆಯ ತಾಲ್ಲೂಕುಗಳಲ್ಲಿ ಕೆಲವು ವ್ಯಕ್ತಿಗಳು ಸ್ವಲಾಭಕ್ಕಾಗಿ ಅನಧಿಕೃತ ಸ್ಥಳದಲ್ಲಿ ಸೇವನೆಗಾಗಿ ಅನಧಿಕೃತವಾಗಿ ಮದ್ಯ ಮಾರಾಟ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | ಇದನ್ನು ನಿಯಂತ್ರಿಸಲು ಅಬಕಾರಿ ಇಲಾಖೆ ಹಾಗೂ ಇದಕ್ಕೆ ಪ್ರತ್ಯೇಕವಾಗಿರುವ ಲಾಟರಿ ಮತ್ತು ಜಾರಿ ಪಡೆ ಎಷ್ಟು ಕಡೆ ದಾಳಿ ನಡೆಸಿದ್ದಾರೆ. ನಡೆಸಿದ್ದಲ್ಲಿ. ಎಷ್ಟು ಪ್ರಕರಣಗಳು ದಾಖಲಾಗಿದೆ: ಎಷ್ಟು ಪ್ರಕರಣಗಳನ್ನು ತನಿಖೆಗೆ ಒಳಪಡಿಸಲಾಗಿದೆ: (ಸ್ಪಷ್ಟ ಮಾಹಿತಿ ನೀಡುವುದು) | ಅಬಕಾರಿ ಇಲಾಖೆಯಿಂದ 2019–20ನೇ ಸಾಲಿನ ಜುಲೈ ಮಾಹೆಯಿಂದ ಫೆಬ್ರವರಿ–2020ನೇ ಮಾಹೆಯವರೆಗೆ ಜಿಲ್ಲಾದ್ಯಂತ ಒಟ್ಟು 1680 ದಾಳಿಗಳನ್ನು ನಡೆಸಿ, 412 ಪ್ರಕರಣಗಳನ್ನು ದಾಖಲು ಮಾಡಲಾಗಿರುತ್ತದೆ.<br>ದಾಖಲು ಮಾಡಲಾದ 412 ಪ್ರಕರಣಗಳ ಪೈಕಿ 377 ಪ್ರಕರಣಗಳು ಸರ್ಕಾರದ ಮುಖಾಂತರವೆ ಇತ್ಯರ್ಥಪಡಿಸಬಹುದಾದ ಪ್ರಕರಣಗಳಾಗಿದ್ದು, ದಂಡ ವಿಧಿಸಿ, ರೂ.7,54,000/– ದಂಡದ ಮೊತ್ತವನ್ನು ವಸೂಲಿಸಲಾಗಿರುತ್ತದೆ. ಉಳಿದ 35 ಪ್ರಕರಣಗಳು ಜಾಮೀನಾರ್ಹವಲ್ಲದ ಪ್ರಕರಣಗಳಾಗಿದ್ದು, ಅವುಗಳಲ್ಲಿ ಭಾಗಿಯಾದ ಆರೋಪಿತರ ವಿರುದ್ಧ ತನಿಖೆಗೊಳಪಡಿಸಿ ದೋಷಾರೋಪಣಾ ಪಟ್ಟಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಲಾಗಿರುತ್ತದೆ. |
| ಇ) | ಇಂತಹ ಪ್ರಕರಣಗಳಿಗೆ ಸಂಬಂಧಿಸಿದಂತೆ ಮೂಲ ವ್ಯಕ್ತಿ ಯಾರೆಂಬುದು ಪತ್ತೆ ಹಚ್ಚಲಾಗಿದೆಯೇ: (ವಿವರ ನೀಡುವುದು) | ಹೀಗೆ ದಾಖಲಾದ ಪ್ರಕರಣಗಳನ್ನು ನೇಮಿಸಲಾದ ತನಿಖಾಧಿಕಾರಿಗಳು ತನಿಖೆಗೊಳಪಡಿಸಿ, ಪ್ರಕರಣಗಳಲ್ಲಿ ಭಾಗಿಯಾದ ಎಲ್ಲರ ವಿರುದ್ಧ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಲಾಗಿರುತ್ತದೆ. |

11/3/20
(ಎಚ್. ನಾಗೇಶ್)
ಅಬಕಾರಿ ಸಚಿವರು

ಆಇ 21 ಇ.ಎಲ್.ಕ್ಯೂ. 2020